# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಫೆಬ್ರವರಿ ೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬)<br>Bengaluru, Thursday, February 5, 2015 (Magha 16, Shaka Varsha 1936) | ಸಂಚಿಕೆ ೬<br>Issue 6 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕರ್ನಾಟಕ ಲೋಕಸೇವಾ ಆಯೋಗ

**ಉದ್ಯೋಗ ಸೌಧ, ಬೆಂಗಳೂರು–1**

**ವಿಷಯ :** ಆಯೋಗವು ನಡೆಸಿದ 2013ನೇ ಸಾಲಿನ ದ್ವಿತೀಯ ಅಧಿವೇಶನ ಇಲಾಖಾ ಪರೀಕ್ಷೆಗಳಲ್ಲಿ ಪರೀಕ್ಷಾ ದುರಾಚಾರ ಪ್ರಕರಣಗಳಲ್ಲಿ ಭಾಗಿಯಾದ ಮೂವರು ಅಭ್ಯರ್ಥಿಗಳಿಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**

1. ಶ್ರೀ ರುದ್ರಯ್ಯ ಬಿ.ಹೆಚ್.ಎಂ. (ನೋಂ.ಸಂ.59182), ಡಾ.ಗೀತಾ. ಬಿ (ನೋಂ.ಸಂ.59132) ಮತ್ತು ಶ್ರೀ ಬಸವನಗೌಡ (ನೋಂ.ಸಂ.59269) ಇವರುಗಳಿಗೆ ಜಾರಿ ಮಾಡಿದ ಆಯೋಗದ ಕಾರಣ ಕೇಳುವ ನೋಟೀಸ್ ಸಂಖ್ಯೆ:ಇ.ಪ.(3)24–37/2014–15/ಪಿಎಸ್‌ಸಿ, ದಿ: 05.05.2014
2. ಸದರಿ ಅಭ್ಯರ್ಥಿಗಳು ಸಲ್ಲಿಸಿರುವ ಲಿಖಿತ ಸಮಜಾಯಿಷಿಗಳು ಅನುಕ್ರಮವಾಗಿ ದಿ: 15.07.2014, 14.05.2014 ಮತ್ತು 24.05.2014.
3. ಆಯೋಗದ ಆದೇಶ ಸಂಖ್ಯೆ: ಆಡಳಿತ:755/2014–15/ಪಿಎಸ್‌ಸಿ, ದಿ: 18.08.2014
4. ಆಯೋಗದ ವಿಚಾರಣಾ ನೋಟೀಸ್ ಸಂಖ್ಯೆ:ಎಪಿ(1)356/2014–15/ಪಿಎಸ್‌ಸಿ, ದಿ: 22.08.2014
5. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿ: 15.09.2014
6. ದಿ: 20.10.2014ರ ಆಯೋಗದ ಸಭಾ ನಡವಳಿಗಳು.

**ಪ್ರಸ್ತಾವನೆ:–**

ಆಯೋಗವು ನಡೆಸಿದ 2013ನೇ ಸಾಲಿ ದ್ವಿತೀಯ ಅಧಿವೇಶನ ಇಲಾಖಾ ಪರೀಕ್ಷೆಗಳಲ್ಲಿ ದಿ: 15.02.2014 ರಂದು ಜರುಗಿದ ಜನರಲ್ ಲಾ ಭಾಗ–2ರ ವಿಷಯದ ಇಲಾಖಾ ಪರೀಕ್ಷೆಯ ಸಂದರ್ಭದಲ್ಲಿ ಪರೀಕ್ಷಾ ವೀಕ್ಷಕರಾದ ಬಳ್ಳಾರಿ ಉಪವಿಭಾಗಾಧಿಕಾರಿಗಳು ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿದಾಗ ಕೆಲವು ಅಭ್ಯರ್ಥಿಗಳು malpracticeನಲ್ಲಿ ತೊಡಗಿದ್ದರಿಂದ ಅಭ್ಯರ್ಥಿಗಳ ಓ.ಎಂ.ಆರ್. ಉತ್ತರ ಪತ್ರಗಳನ್ನು ವಶಪಡಿಸಿಕೊಂಡಿರಲಾಗಿರುತ್ತದೆ ಎಂದು ಪರೀಕ್ಷಾ ಉಪಕೇಂದ್ರವಾದ ಸರ್ಕಾರಿ ಪದವಿ ಪೂರ್ವ ಕಾಲೇಜಿನ(ಪ್ರೌಢ ಶಾಲಾ ವಿಭಾಗ) ಮೇಲ್ವಿಚಾರಕರಾದ ಉಪ ಪ್ರಾಚಾರ್ಯರು ಆಯೋಗಕ್ಕೆ ದಿ: 15.02.2014ರಂದು ವರದಿಯನ್ನು ನೀಡಿರುತ್ತಾರೆ.

ಮೇಲಿನ ವರದಿಯ ಮೇರೆಗೆ ಉಲ್ಲೇಖ–(1)ರಲ್ಲಿ ಓದಲಾದ ದಿ: 05.05.2014ರ ಕಾರಣ ಕೇಳುವ ನೋಟೀಸುಗಳನ್ನು ಜಾರಿ ಮಾಡಿ ಆಪಾದಿತ ಅಭ್ಯರ್ಥಿಗಳಿಂದ ಲಿಖಿತ ಸಮಜಾಯಿಷಿಗಳನ್ನು ಕೇಳಲಾಗಿತ್ತು. ಸದರಿ ನೋಟೀಸುಗಳಿಗೆ ಆಪಾದಿತರ ಉಲ್ಲೇಖ–(2)ರಲ್ಲಿ ಓದಲಾದ ದಿನಾಂಕ: 15.07.2014, 14.05.2014 ಮತ್ತು 24.05.2014ರ ಲಿಖಿತ ಸಮಜಾಯಿಷಿಗಳನ್ನು ಆಯೋಗದಲ್ಲಿ ಸ್ವೀಕರಿಸಲಾಗಿರುತ್ತದೆ. ಸದರಿ ಮೂವರು ಅಭ್ಯರ್ಥಿಗಳು ನೋಟೀಸುಗಳಲ್ಲಿ ಆರೋಪಿಸಲಾದ ಪರೀಕ್ಷಾ ದುರಾಚಾರದ ಆಪಾದನೆಗಳ ಬಗ್ಗೆ ಲಿಖಿತ ಸಮಜಾಯಿಷಿಗಳಲ್ಲಿ ಸ್ಪಷ್ಟವಾಗಿ ನಿರಾಕರಿಸಿದ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಗಳನ್ನು ತಿಳಿಯುವ ಸಲುವಾಗಿ ಉಲ್ಲೇಖ–(3)ರಲ್ಲಿ ಓದಲಾದ ದಿ: 18.08.2014ರ ಆಯೋಗದ ಆದೇಶದಂತೆ ಆಪಾದಿತ ಅಭ್ಯರ್ಥಿಗಳಿಗೆ ಉಲ್ಲೇಖ–(4)ರಲ್ಲಿ ಓದಲಾದ ದಿ: 22.08.2014ರ ವಿಚಾರಣಾ ನೋಟೀಸುಗಳನ್ನು ಜಾರಿ ಮಾಡಿ ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ಸಂದರ್ಭದಲ್ಲಿ ಕಂಡುಬಂದಂತೆ ಶ್ರೀ.ರುದ್ರಯ್ಯ. ಬಿ.ಹೆಚ್.ಎಂ. (ನೋಂ.ಸಂ.59182), ಡಾ. ಗೀತಾ. ಬಿ (ನೋಂ.ಸಂ.59132) ಮತ್ತು ಶ್ರೀ ಬಸವನಗೌಡ (ನೋಂ.ಸಂ.59269) ಇವರುಗಳು ಪರೀಕ್ಷಾ ನಿಯಮಗಳನ್ನು ಉಲ್ಲಂಘಿಸಿ ಪರೀಕ್ಷಾ ದುರಾಚಾರ ಎಸಗಿರುವ ಆರೋಪಗಳು ಸಾಬೀತಾಗಿರುತ್ತದೆಂದು ಉಲ್ಲೇಖ–(5)ರಲ್ಲಿ ಓದಲಾದ ದಿ: 15.09.2014ರ ತಮ್ಮ ವಿಚಾರಣಾ ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯನ್ನೊಳಗೊಂಡ ಸಭಾ ಟಿಪ್ಪಣಿಯನ್ನು ಆಯೋಗದ ಸಭೆಯ ಮುಂದೆ ಮಂಡಿಸಲಾಗಿ ಮೂರು ಜನ ಅಭ್ಯರ್ಥಿಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದರಿಂದ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ:ಆಡಳಿತ.398/93–94/ಪಿಎಸ್‌ಸಿ ದಿನಾಂಕ: 14.07.1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ರುದ್ರಯ್ಯ ಬಿ.ಹೆಚ್.ಎಂ. (ನೋಂ.ಸಂ.59182), ಡಾ.ಗೀತಾ. ಬಿ (ನೋಂ.ಸಂ.59132) ಮತ್ತು ಶ್ರೀ ಬಸವನಗೌಡ (ನೋಂ.ಸಂ.59269) ಇವರುಗಳ ಪ್ರಸಕ್ತ 2013ನೇ ಸಾಲಿನ ದ್ವಿತೀಯ ಅಧಿವೇಶನ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಉಲ್ಲೇಖ(6)ರಲ್ಲಿನ ದಿ: 20.10.2014ರ ಆಯೋಗದ ಸಭಾ ನಡವಳಿಗಳಲ್ಲಿ ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಈ ಮುಂದಿನ ಆದೇಶ.

**ಆದೇಶ ಸಂಖ್ಯೆ:ಇಪ(3)339–341/2014–15/ಪಿಎಸ್‌ಸಿ, ಬೆಂಗಳೂರು, ದಿನಾಂಕ: 25.11.2014.**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ ಆಡಳಿತ,398/93–94/ಪಿಎಸ್‌ಸಿ ದಿನಾಂಕ: 14.07.1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ರುದ್ರಯ್ಯ ಬಿ.ಹೆಚ್.ಎಂ. (ನೋಂ.ಸಂ.59182) ಟಿ.ಜಿ. ಶಿಕ್ಷಕರು ಜಿ.ಎಂ.ಹೆಚ್.ಪಿ.ಎಸ್., ಜಿ.ಕೋಡಿಹಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ–583214, ಡಾ.ಗೀತಾ. ಬಿ (ನೋಂ.ಸಂ.59132) ವೈದ್ಯಾಧಿಕಾರಿಗಳು, (ಆಯುಶ್) ಸರ್ಕಾರಿ ಆಯುರ್ವೇದಿಕ್ ಆಸ್ಪತ್ರೆ, ಬನ್ನಿಕಲ್ ಅಂಚೆ ಹೆಚ್.ಬಿ. ಹಳ್ಳಿ, ಬಳ್ಳಾರಿ ಜಿಲ್ಲೆ–583214 ಮತ್ತು ಶ್ರೀ. ಬಸವನಗೌಡ (ನೋಂ.ಸಂ.59269) ಕರವಸೂಲಿಗಾರರು, ಗ್ರಾಮಪಂಚಾಯತ್, ಕುಡುದರಹಾಳು ಅಂಚೆ, ಶಿರಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ–583121 ಇವರುಗಳ ಪ್ರಸಕ್ತ 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಿದೆ.

**ಮನೋಜ್ ಕುಮಾರ್ ಮೀನಾ ಭಾ.ಆ.ಸೇ**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ. ಬೆಂಗಳೂರು

PR-1024
SC-25

## ಗಣಿ ಮತ್ತು ಭೂವಿಜ್ಞಾನ ಇಲಾಖೆ
## ನಂ.167, 11ನೇ ಮೇನ್ ಸರಸ್ವತಿಪುರಂ ಮೈಸೂರು
### ಅಧಿಸೂಚನೆ

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ–8ಎ/2014–15 ದಿನಾಂಕ: 27.11.2014**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಕಟ್ಟಡ ಕಲ್ಲಿನ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಹಿರಿಯ ಭೂವಿಜ್ಞಾನಿ(ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ, ದೂರವಾಣಿ ಸಂಖ್ಯೆ: 08182–221647 ಇವರಿಂದ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕೃತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಹಿರಿಯ ಭೂವಿಜ್ಞಾನಿ(ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು. ಕರ್ನಾಟಕ ಉಪಖನಿಜ ರಿಯಾತಿಯಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು. ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಕ್ಷೇಪಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎಕರೆ/ಗುಂಟೆ | ಹಳೆ ಕ.ಗ.ಗು ಸಂಖ್ಯೆ | ಚೆಕ್ಕುಬಂದಿ |
|---|---|---|---|---|---|---|---|---|
| 1 | ಶಿವಮೊಗ್ಗ | ಭದ್ರಾವತಿ | ಕ.ಕಲ್ಲು | ಕೂಡ್ಲಿಗೆರೆ | 157 | 0–20 | 564 | ಉ: ಕ.ಗ.ಗು.ಸಂ. 157 ರ ಭಾಗ<br>ದ: ಸ.ನಂ. 157 ರ ಭಾಗ<br>ಮೂ: ಸ.ನಂ.157 ರ ಭಾಗ<br>ಪ: ಸ.ನಂ. 158 ರ ಭಾಗ |
| 2 | ಶಿವಮೊಗ್ಗ | ಭದ್ರಾವತಿ | ಕ.ಕಲ್ಲು | ಕೂಡ್ಲಿಗೆರೆ | 159 | 0–30 | 534 | ಉ: ಕ.ಗ.ಗು.ಸಂ. 159 ರ ಭಾಗ<br>ದ: ಸ.ನಂ. 159ರ ಭಾಗ<br>ಮೂ: ಸ.ನಂ.159 ರ ಭಾಗ<br>ಪ: ಸ.ನಂ. 159 ರ ಭಾಗ |
| 3 | ಶಿವಮೊಗ್ಗ | ಭದ್ರಾವತಿ | ಕ.ಕಲ್ಲು | ಕೂಡ್ಲಿಗೆರೆ | 157 | 0–20 | 563 | ಉ: ಕ.ಗ.ಗು.ಸಂ. 157 ರ ಭಾಗ<br>ದ: ಸ.ನಂ. 157 ರ ಭಾಗ<br>ಮೂ: ಸ.ನಂ.157 ರ ಭಾಗ<br>ಪ: ಸ.ನಂ. 157 ರ ಭಾಗ |

**ಜಂಟಿ ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ
ದಕ್ಷಿಣ ವಲಯ, ಮೈಸೂರು

PR-1026
SC-05

**ಗಣಿ ಮತ್ತು ಭೂವಿಜ್ಞಾನ ಇಲಾಖೆ**
**ನಂ.167, 11ನೇ ಮೇನ್ ಸರಸ್ವತಿಪುರಂ ಮೈಸೂರು**

**ಅಧಿಸೂಚನೆ**

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ-8ಎ/2014-15 ದಿನಾಂಕ: 18.11.2014**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ-1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಕಟ್ಟಡ ಕಲ್ಲಿನ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಹಿರಿಯ ಭೂವಿಜ್ಞಾನಿ(ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ, ದೂರವಾಣಿ ಸಂಖ್ಯೆ: 08182-221647 ಇವರಿಂದ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕೃತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಹಿರಿಯ ಭೂವಿಜ್ಞಾನಿ(ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಶಿವಮೊಗ್ಗ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು. ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು. ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಕ್ಷೇಪಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎಕರೆ/ಗುಂಟೆ | ಹಳೆ ಕ.ಗ.ಗು ಸಂಖ್ಯೆ | ಚೆಕ್ಕುಬಂದಿ |
|---|---|---|---|---|---|---|---|---|
| 1 | ಶಿವಮೊಗ್ಗ | ತೀರ್ಥಹಳ್ಳಿ | ಕ.ಕಲ್ಲು | ಮೇಲಿನ ಕುರುವಳ್ಳಿ | 75 | 1-30 | 701 | ಉ: ಕ.ಗ.ಗು.ಸಂ. 503 &504 ರ ಭಾಗ<br>ದ: ಸ.ನಂ. 75 ರ ಭಾಗ<br>ಪೂ: ಸ.ನಂ. 75 ರ ಭಾಗ<br>ಪ: ಸ.ನಂ. 75 ರ ಭಾಗ |

**PR-1027**
**SC-05**

**ಜಂಟಿ ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ
ದಕ್ಷಿಣ ವಲಯ, ಮೈಸೂರು

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾದಂಡಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ.**

**ಅಧಿಸೂಚನೆ**

**ನಂ.ಎಂ.ಎ.ಜಿ.(1) ಸಿ.ಆರ್. 62/14-15/41026 ದಿನಾಂಕ: 24-11-2014**

1962 ರ ಕರ್ನಾಟಕ ನಿಕ್ಷೇಪ ನಿಧಿ ಕಾಯಿದೆ ಸೆ 4(ಬಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲಾಧಿಕಾರಿ ವಿ.ಪಿ. ಇಕ್ಕೇರಿ ಆದ ನಾನು ಹಿತಾಸಕ್ತಿ ಯುಳ್ಳ ವ್ಯಕ್ತಿಗಳಿಗೆ ಈ ಮೂಲಕ ತಿಳಿಯ ಪಡಿಸುವುದೇನೆಂದರೆ, ಸಾಗರ ತಾಲ್ಲೂಕು, ಬಾರಂಗಿ ಹೋಬಳಿ ಹೊನ್ನೆಮರಡು ಗ್ರಾಮದ ಕೊಳಚಗಾರು ಎಂಬಲ್ಲಿ, ಶ್ರೀಮತಿ ಸಾಧು ಕೋಂ ಕೆ.ಆರ್. ಶಂಕರ ಎಂಬುವವರಿಗೆ ದಿನಾಂಕ: 5.11.2014 ರಂದು ನೀಲಗಿರಿ ಪ್ಲಾಂಟೇಶನ್ ಕಲ್ಲಿನ ಪೊಟರೆಯೊಳಗೆ ಇರಿಸಲಾಗಿದ್ದ ಸಣ್ಣ ತಾಮ್ರದ ಡಬ್ಬಿಯೊಳಗೆ ಬಂಗಾರದ ನಾಣ್ಯಗಳು ದೊರೆತಿದ್ದು, ಅವು ಈ ಕೆಳಗೆ ವಿವರಣೆ ನೀಡಿದಂತೆ ಇರುತ್ತದೆ. ಈ ಸಂಬಂಧ ಹಿತಾಸಕ್ತಿಯುಳ್ಳವರು ಸಿಕ್ಕಿರುವ ನಿಧಿನಿಕ್ಷೇಪದ ಮೇಲೆ ತಮ್ಮ ಹಕ್ಕು ಸಾಧಿಸುವುದಿದ್ದಲ್ಲಿ ದಿನಾಂಕ: 5.01.2015 ರಂದು ಮಧ್ಯಾಹ್ನ 3.00 ಘಂಟೆಗೆ ಖುದ್ದಾಗಿ ಯಾಗಲೀ ಅಥವಾ ತಮ್ಮ ಪ್ರತಿನಿಧಿಯ ಮೂಲಕವಾಗಿಯಾಗಲೀ ಹಾಜರಾಗಿ ತಮ್ಮ ಹಕ್ಕನ್ನು ಪ್ರತಿಪಾದಿಸುವುದು.

| ಕ್ರ.ಸಂ. | ನಿಧಿಯ ಸ್ವರೂಪ | ಪ್ರಮಾಣ | ತೂಕ | ಅಂದಾಜು ಮೌಲ್ಯ |
|---|---|---|---|---|
| 1 | ಬಂಗಾರದ ನಾಣ್ಯಗಳು | 23 | 74.580 ಗ್ರಾಂ | 1.75.000/- |
| 2 | ಚಿನ್ನದ ಕಿವಿರಿಂಗ್ ಪುರಾತನ ಕಾಲದ | 2 | 8.62 ಗ್ರಾಂ | |
| 3 | ಚಿಕ್ಕ ತಾಮ್ರದ ಡಬ್ಬಿ | 1 | - | - |

ನಿಧಿ ದೊರೆತ ದಿನಾಂಕ: 05.11.2014 ನಿಧಿಯು ದೊರೆತ ಜಾಗ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು, ಬಾರಂಗಿ ಹೋಬಳಿ ಹೊನ್ನೆಮರಡು ಗ್ರಾಮದ ಕೊಳಚೆಗಾರು ಎಂಬಲ್ಲಿ, ಶ್ರೀ ನಾರಾಯಣಸ್ವಾಮಿ ಹೆಗಡೆ ಎಂಬುವವರಿಗೆ ಸೇರಿದ ಹೊನ್ನೆಮರಡು ಸ.ನಂ. 182 ರ ನೀಲಗಿರಿ ಪ್ಲಾಂಟೇಶನ್ ನಲ್ಲಿ.

**ವಿ.ಪಿ. ಇಕ್ಕೇರಿ**
ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ

## OFFICE OF THE DEPUTY COMMISSIONER & DIST: MAGISTRATE, SHIMOGA DISTRICT.

### NOTIFICATION

**ನಂ.ಎಂ.ಎ.ಜಿ.(1) ಸಿ.ಆರ್. 62/14–15/41026 ದಿನಾಂಕ: 24.11.2014**

In Exercise of powers conferred on me under the provision of sub-section (b) of section 4 of the Karnataka treasure Trove Act 1962, V.P. Ikkere, Deputy Commissioner, Shimoga District here by notify to the information of those interested that a treasure trove has been found in Kolachegaru, Honnemaradu village, Sagara Taluk, Shimoga District. The particulars of which are furnished below and that any person claiming the treasure or any part there of should appear personally or by agent before the undersigned at 3.00 P.M. on 5.01.2015. And put forth their claims if any

| SL.No. | Nature of Treasure | Quantity | Weight in Grams | Approximate Value (Rs.) |
|---|---|---|---|---|
| 1 | Gold Coins | 23 | 74.580 Grams | 1.75.000/- |
| 2 | Gold earring | 2 | 8.62 Grams | |
| 3 | Small Copper Container | 1 | - | - |

Date of which the Treasure was found Dated: 5.11.2014 Nilagiri Plantation S.NO. 182 Honnemaradu village, Barangi Hobli, Kolachegaru, Sagara Taluk, Shimoga District.

**V.P.ikkeri**
Deputy Commissioner,
Shimoga District, Shimoga

**PR-1028**
**S.C.05**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 38 ಎಲ್‌ಆರ್‌ಎಂ 2014 ಬೆಂಗಳೂರು, ದಿನಾಂಕ: 19.11.2014**

ಜಯರಾಜ್ ಇಸ್‌ಪಾಥ್ ಲಿ., ಬಿ. ಬೆಳಗಲ್ಲು ಇವರಿಗೆ ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಬೆಳಗಲ್ಲು ಗ್ರಾಮದ ಸರ್ವೆ ನಂ.69ಎ/2 ಮತ್ತು ಇತರೆ ಸರ್ವೆ ನಂಬರುಗಳಲ್ಲಿ ಒಟ್ಟು ವಿಸ್ತೀರ್ಣ 29–75 ಎಕರೆ ಕೃಷಿ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1ಎ) ರಡಿ ವಿನಾಯತಿ ನೀಡಲು ಕೋರಿ ಜಿಲ್ಲಾಧಿಕಾರಿ, ಬಳ್ಳಾರಿ ಇವರ ಪತ್ರ ಸಂಖ್ಯೆ:ಕಂ/ಭೂ.ಸು/87/2011–12, ದಿನಾಂಕ: 15.05.2014 ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974 ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961 ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಮೇಲ್ಕಂಡ ಒಟ್ಟು 29–75 ಎಕರೆ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.
5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ.ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**PR-1029**

**SC-20**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 14 ಎಲ್‌ಆರ್‌ಎಂ 2013 ಬೆಂಗಳೂರು, ದಿನಾಂಕ: 22.11.2014**

ಮೆ: ಕಫೆ ಕಾಫಿ ವಿಲೇಜ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್., ಬೆಂಗಳೂರು ಇವರಿಗೆ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಆಲದೇವರ ಹೊಸೂರು ಗ್ರಾಮದ ಸರ್ವೆ ನಂಬರುಗಳಲ್ಲಿ 24 ಎಕರೆ 07 ಕೃಷಿ ಭೂಮಿಯನ್ನು ಖರೀದಿಸಲು ಗಾಲ್ಫ ಮತ್ತು ರೆಸಾರ್ಟ ನಿರ್ಮಾಣ ಮತ್ತು ಪ್ರವಾಸೋದ್ಯಮ ಅಭಿವೃದ್ಧಿ ಯೋಜನೆಯ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1ಎ) ರಡಿ ವಿನಾಯಿತಿ ನೀಡಲು ಕೋರಿ ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ವಿವ/61/2012–13/19640, ದಿನಾಂಕ: 31.01.2013 ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974 ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961 ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಮೇಲ್ಕಂಡ ಒಟ್ಟು 24–07 ಎಕರೆ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ.ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

**PR-1030**

**SC-20**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 46 ಎಲ್‌ಆರ್‌ಎಂ 2014 ಬೆಂಗಳೂರು, ದಿನಾಂಕ: 22.11.2014**

ಗಂಗಾಯಾಧವ ಸಂಘ (ರಿ), ಕೆ.ಆರ್.ರಸ್ತೆ, ಕರಿಸಂದ್ರ ಬೆಂಗಳೂರು ಇವರಿಗೆ ಕನಕಪುರ ತಾಲ್ಲೂಕು, ಮರಳವಾಡಿ ಹೋಬಳಿ, ಚಿಕ್ಕಮರಳವಾಡಿ ಗ್ರಾಮದ ಸ.ನಂ.81 ರಲ್ಲಿ 3.30 ಎ/ಗುಂ, 82 ರಲ್ಲಿ 3.34 ಎ/ಗುಂ ಮತ್ತು 151 ರಲ್ಲಿ 06–17 ಎ/ಗುಂ ಒಟ್ಟು 14–01 ಎ/ಗುಂ ವಿಸ್ತೀರ್ಣದ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 ರಡಿ ವಿನಾಯಿತಿ ನೀಡಲು ಕೋರಿ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ರಾಜಿಕ/ಎಲ್‌ಆರ್‌ಎಫ್/ಸಿಆರ್/2/2014–15, ದಿನಾಂಕ: 17.06.2014 ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974 ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961 ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109(1)ರಡಿ ಮೇಲ್ಕಂಡ ಒಟ್ಟು 14–01 ಎಕರೆ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.
5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.
6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.
7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.
8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಂ.ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

PR-1031

SC-20

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 101 ಎಲ್‌ಜಿಎಂ 2014 ಬೆಂಗಳೂರು, ದಿನಾಂಕ: 26.11.2014**

**ನಮೂನೆ – 27**

**ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 68(1) ಮತ್ತು ನಿಯಮ 94 ರನ್ವಯ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಸಾರ್ವಜನಿಕ ಸ್ವತ್ತಿನ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ ಸರ್ಕಾರಿ ಪ್ರೌಢಶಾಲೆ ಕಟ್ಟಡ ನಿರ್ಮಾಣದ ಉದ್ದೇಶಕ್ಕಾಗಿ ಕಾಯ್ದಿರಿಸಲು.

ಪ್ರಯುಕ್ತ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ಸ್ವತ್ತಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸ್ವತ್ತಿಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಕ್ಕಿನ ಜೊತೆಗೆ ಸದರಿ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಅನ್ಯಥಾ ಭಾದಿತನಾಗುವ/ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊರಡಿಸಿದ ತೊಂಭತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯು ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ನಷ್ಟ ಪರಿಹಾರಕ್ಕೆ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಸರ್ಕಾರಕ್ಕೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಮುಕ್ತ ಆಕ್ಷೇಪಣೆಗಳನ್ನು ಮತ್ತು ಹಕ್ಕುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಸರ್ಕಾರದ ಹಂತದಲ್ಲಿ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಸರ್ಕಾರಿ ಕಟ್ಟೆ ಭಾಗ ಇತ್ಯಾದಿ ಇರುವ ಗ್ರಾಮ | ಕಟ್ಟೆಹುಣಸೂರು |
| ತಾಲ್ಲೂಕು | ಹೆಚ್.ಡಿ.ಕೋಟೆ |
| **ಜಿಲ್ಲೆ** | **ಮೈಸೂರು** |
| ಸರ್ಕಾರಿ ಜೇಡಿ ಕಟ್ಟೆ ಮೊದಲಾದುದರ ಭಾಗ ಅಥವಾ ಭಾಗಗಳ ಭಾಗದ ವರ್ಣನೆ | ಸರ್ವೆ ನಂ: 102, 103ಕ್ಕೆ ಹೊಂದಿಕೊಂಡಿರುವ ನಂಬರ್ ಕಾಣದ ಕರಾಬು |
| ಸರ್ಕಾರಿ ಜೇಡಿ ಕಟ್ಟೆ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | 1.30 ಗುಂಟೆ |
| **ಮೇರೆ** | |
| ಪೂರ್ವ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ |
| ಪಶ್ಚಿಮ | ಸರ್ವೆ ನಂ. 101 ಮತ್ತು ರಸ್ತೆ |
| ಉತ್ತರ | ಸರ್ಕಾರಿ ರಸ್ತೆ |
| ದಕ್ಷಿಣ | ಸರ್ವೆ ನಂ: 102 & 101 ರ ಜಮೀನು |
| ಸಾರ್ವಜನಿಕ ರಸ್ತೆ/ಬೀದಿ/ಗಲ್ಲಿ/ದಾರಿ ಅಥವಾ ಅದರ ಭಾಗ | ಸರ್ಕಾರಿ ಹದ್ದಿಗೆ ಹಿಡಿದ ಮಾರ್ಗ (1.30 ವಿಸ್ತೀರ್ಣ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ–2)

**PR-1032**
**SC-50**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ:ಕಸಂವಾ 193 ಕೆಎಂಯು 2014 ಬೆಂಗಳೂರು, ದಿನಾಂಕ: 28–10–2014.

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕಿನ ಮಳವಳ್ಳಿ ಮತ್ತು ಸತ್ತೇಗಾಲದ ನಡುವೆ ಇರುವ ಬ್ರಿಟಿಷರ ಕಾಲದ ವೆಸ್ಲಿ ಬ್ರಿಡ್ಜ್ (ಸೇತುವೆ)ಯನ್ನು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(3)ರ ಅಡಿ" ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕಗಳನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ.

ಈ ಪ್ರದೇಶವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತರಾದವರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರ ಸ್ವೀಕರಿಸಿದಲ್ಲಿ, ಸರ್ಕಾರವು ಅದನ್ನು ಪರಿಶೀಲಿಸುವುದು. ಈ ಅಧಿಸೂಚನೆಯ ಕುರಿತಾದ ಯಾವುದೇ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕೊಠಡಿ ಸಂಖ್ಯೆ 2, ವಿಕಾಸ ಸೌಧ ನೆಲಮಹಡಿ, ಬೆಂಗಳೂರು–560 001 ಇವರಿಗೆ ಸಲ್ಲಿಸಬಹುದಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, (ಆಡಳಿತ ಕನ್ನಡ)

ಪರಿವಿಡಿ

ಅಧಿಸೂಚನೆ ಸಂಖ್ಯೆ ಕಸಂವಾ 193 ಕೆಎಂಯು 2014, ದಿನಾಂಕ: 28-10-2014.

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ಚಾಮರಾಜ ನಗರ ಜಿಲ್ಲೆ | ಕೊಳ್ಳೇಗಾಲ | ಮಳವಳ್ಳಿ ಮತ್ತು ಸತ್ತೇಗಾಲದ ನಡುವೆ | ಬ್ರಿಟಿಷರ ಕಾಲದ ವೆಸ್ಲಿ ಬ್ರಿಡ್ಜ್ (ಸೇತುವೆ) | ಸತ್ತೇಗಾಲ ಗ್ರಾಮದ ಸರ್ವೆ ನಂ.1692/1ರಲ್ಲಿರುತ್ತದೆ. | 0.30 ಸೆಂಟ್ | ಪೂರ್ವಕ್ಕೆ: | ಕಾವೇರಿ ನದಿ | ಸರ್ಕಾರದ ಒಡೆತನ | ವೆಸ್ಲಿ ಬ್ರಿಡ್ಜ್ (ಸೇತುವೆ)ಯು ಬ್ರಿಟಿಷರ ಕಾಲದ ಕ್ರಿ.ಪೂ.1863ರಲ್ಲಿ ನಿರ್ಮಾಣವಾಗಿರುತ್ತದೆ.ಈ ಸೇತುವೆಯು ಶಿವನಸಮುದ್ರ ಗ್ರಾಮಕ್ಕೆ ಸಂಪರ್ಕ ಕಲ್ಪಿಸುವ ಉದ್ದೇಶಕ್ಕಾಗಿ ನಿರ್ಮಿಸಿರುವ ಸೇತುವೆಯಾಗಿರುತ್ತದೆ. |
| | | | | | | ಪಶ್ಚಿಮಕ್ಕೆ: | ಕಾವೇರಿ ನದಿ | | |
| | | | | | | ಉತ್ತರಕ್ಕೆ: | ರಸ್ತೆ | | |
| | | | | | | ದಕ್ಷಿಣಕ್ಕೆ: | ರಸ್ತೆ | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಂಜುನಾಥ ಪಾಟೀಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, (ಆಡಳಿತ ಕನ್ನಡ)

PR-29
SC-50

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 194 ಕೆಎಂಯು 2014 ಬೆಂಗಳೂರು, ದಿನಾಂಕ: 28-10-2014.**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ತುಮಕೂರು ಜಿಲ್ಲೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಕಂದಿಕೆರೆ ಗ್ರಾಮದಲ್ಲಿರುವ ಶ್ರೀ ಶಾಂತಿನಾಥ ದೇವಾಲಯವನ್ನು **"ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(3)ರ ಅಡಿ"** ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕಗಳನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ.

ಈ ಪ್ರದೇಶವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತರಾದವರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರ ಸ್ವೀಕರಿಸಿದಲ್ಲಿ, ಸರ್ಕಾರವು ಅದನ್ನು ಪರಿಶೀಲಿಸುವುದು. ಈ ಅಧಿಸೂಚನೆಯ ಕುರಿತಾದ ಯಾವುದೇ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕೊಠಡಿ ಸಂಖ್ಯೆ 2, ವಿಕಾಸ ಸೌಧ ನೆಲಮಹಡಿ, ಬೆಂಗಳೂರು-560 001 ಇವರಿಗೆ ಸಲ್ಲಿಸಬಹುದಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಂಜುನಾಥ ಪಾಟೀಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, (ಆಡಳಿತ ಕನ್ನಡ)

ಪರಿವಿಡಿ

ಅಧಿಸೂಚನೆ ಸಂಖ್ಯೆ ಕಸಂವಾ 194 ಕೆಎಂಯು 2014, ದಿನಾಂಕ: 28-10-2014.

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ತುಮಕೂರು ಜಿಲ್ಲೆ | ಚಿಕ್ಕನಾಯಕನ ಹಳ್ಳಿ | ಕಂದಿಕೆರೆ ಗ್ರಾಮ | ಶ್ರೀಶಾಂತಿನಾಥ ದೇವಾಲಯದ | ಕ್ರಮ ಸಂಖ್ಯೆ: 791 | 5040ಚ.ಅ | ಪೂರ್ವ: | ನಿವೇಶನಗಳು | ಮುಜರಾಯಿ | ಈ ದೇವಾಲಯವು ಪಂಚಬಸಿದಿ ಶೈಲಿಯಲ್ಲಿ ನಿರ್ಮಿತವಾಗಿದೆ. |
| | | | | | | ಪಶ್ಚಿಮ: | ರಸ್ತೆ | | |
| | | | | | | ಉತ್ತರ: | ಒಣಿ | | |
| | | | | | | ದಕ್ಷಿಣ: | ಸಾರ್ವಜನಿಕರ ದಾರಿ | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಂಜುನಾಥ ಪಾಟೀಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, (ಆಡಳಿತ ಕನ್ನಡ)

PR-30
SC-50

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 195 ಕೆಎಂಯು 2014 ಬೆಂಗಳೂರು, ದಿನಾಂಕ: 28-10-2014.**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಕೋಲಾರ ಜಿಲ್ಲೆ, ಕೋಲಾರ ತಾಲ್ಲೂಕು, ವೇಮಗಲ್ ಹೋಬಳಿ, ಸೀತಿ ಗ್ರಾಮದಲ್ಲಿರುವ ಶ್ರೀ ಪತ್ತೇಶ್ವರಸ್ವಾಮಿ ದೇವಾಲಯವನ್ನು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(3)ರ ಅಡಿ "ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕಗಳನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ.

ಈ ಪ್ರದೇಶವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತರಾದವರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರ ಸ್ವೀಕರಿಸಿದಲ್ಲಿ, ಸರ್ಕಾರವು ಅದನ್ನು ಪರಿಶೀಲಿಸುವುದು. ಈ ಅಧಿಸೂಚನೆಯ ಕುರಿತಾದ ಯಾವುದೇ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕೊಠಡಿ ಸಂಖ್ಯೆ 2, ವಿಕಾಸ ಸೌಧ ನೆಲಮಹಡಿ, ಬೆಂಗಳೂರು-560 001 ಇವರಿಗೆ ಸಲ್ಲಿಸಬಹುದಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, (ಆಡಳಿತ ಕನ್ನಡ)

### ಪರಿವಿಡಿ

**ಅಧಿಸೂಚನೆ ಸಂಖ್ಯೆ ಕಸಂವಾ 195 ಕೆಎಂಯು 2014, ದಿನಾಂಕ: 28-10-2014.**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ಕೋಲಾರ ಜಿಲ್ಲೆ | ಕೋಲಾರ | ಸೀತಿ ಗ್ರಾಮ | ಶ್ರೀ ಪತ್ತೇಶ್ವರ ಸ್ವಾಮಿ ದೇವಾಲಯ | ಬೆಟ್ಟದ ಮೇಲಿದೆ | 9460 ಅಡಿಗಳು | ಪೂರ್ವ: | 110 ಅಡಿ | ಮುಜರಾಯಿ ಆಡಳಿತ ವ್ಯಾಪ್ತಿಗೆ ಒಳಪಟ್ಟಿದೆ. | ಕೃತ ಯುಗದಲ್ಲಿ ಭಸ್ಮಾಸುರ ರಾಕ್ಷಸನು ಈಶ್ವರನ ಕುರಿತು ತಪಸ್ಸು ಮಾಡಿದ ಸಂದರ್ಭದಲ್ಲಿ ಈಶ್ವರನು ಪ್ರತ್ಯಕ್ಷನಾಗಿ ಬೇರೆಯವರ ತಲೆಗೆ ಕೈ ಇಟ್ಟರೆ ಭಸ್ಮವಾಗುತ್ತಾರೆ ಎಂಬ ವರ ನೀಡಿದ್ದು, ಸದರಿ ವರದಿಂದ ರಾಕ್ಷಸನು ಈಶ್ವರನ ತಲೆಯ ಮೇಲೆ ಕೈಯಿಡಲು ಪ್ರಯತ್ನಿಸಲಾಗಿ, ಈ ಸಂದರ್ಭದಲ್ಲಿ ಈಶ್ವರ ಸೀತಿ ಗ್ರಾಮದ ಬೆಟ್ಟದ ಮೇಲಿನ ಗುಹೆಯಲ್ಲಿ ಅಡಗಿಕೊಂಡಾಗ ಮಹಾ ವಿಷ್ಣು ಪ್ರತ್ಯಕ್ಷನಾಗಿ ಸ್ತ್ರೀವೇಷಧಾರಿಯಾಗಿ ನೃತ್ಯಮಾಡುತ್ತಾ ತನ್ನ ತಲೆಯ ಮೇಲೆ ತಾನೇ ಕೈ ಇಡುವಂತೆ ಮಾಡಿ ಭಸ್ಮಾಸುರನೇ ಭಸ್ಮವಾಗಿ ಬೆಟ್ಟವಾಗಿ ನೆಲೆಸಿರುತ್ತಾನೆ ಎಂದು ಪ್ರತೀತಿ ಇರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ. |
| | | | | | | ಪಶ್ಚಿಮ: | 110 ಅಡಿ | | |
| | | | | | | ಉತ್ತರ: | 86 ಅಡಿ | | |
| | | | | | | ದಕ್ಷಿಣ: | 86 ಅಡಿ | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

PR--31
SC-50

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 196 ಕೆಎಂಯು 2014 ಬೆಂಗಳೂರು, ದಿನಾಂಕ: 28-10-2014.**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಕಾಶೀಪುರ ಗ್ರಾಮದಲ್ಲಿರುವ ಶ್ರೀ ಕಾಶೇಶ್ವರ ದೇವಾಲಯವನ್ನು "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(3)ರ ಅಡಿ" ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕಗಳನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ.

ಈ ಪ್ರದೇಶವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತರಾದವರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರ ಸ್ವೀಕರಿಸಿದಲ್ಲಿ, ಸರ್ಕಾರವು ಅದನ್ನು ಪರಿಶೀಲಿಸುವುದು. ಈ ಅಧಿಸೂಚನೆಯ ಕುರಿತಾದ ಯಾವುದೇ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕೊಠಡಿ ಸಂಖ್ಯೆ 2, ವಿಕಾಸ ಸೌಧ ನೆಲಮಹಡಿ, ಬೆಂಗಳೂರು-560 001 ಇವರಿಗೆ ಸಲ್ಲಿಸಬಹುದಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ ಪಾಟೀಲ್**
**ಸರ್ಕಾರದ ಅಧೀನ** ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ, (ಆಡಳಿತ ಕನ್ನಡ)

### ಪರಿವಿಡಿ

**ಅಧಿಸೂಚನೆ ಸಂಖ್ಯೆ ಕಸಂವಾ 196 ಕೆಎಂಯು 2014, ದಿನಾಂಕ: 28-10-2014.**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ಹಾಸನ ಜಿಲ್ಲೆ | ಬೇಲೂರು | ಕಾಶೀಪುರ ಗ್ರಾಮ | ಶ್ರೀಕಾಶೇಶ್ವರ ದೇವಾಲಯದ ಸಮುಚ್ಛಯವನ್ನು | ಸರ್ವೆ ನಂ.8/1 | 0.36 ಗುಂಟೆ | ಪೂರ್ವ: | ರಥದ ಬೀದಿ | ಸರ್ಕಾರ | ಪುರಾತನ 5 ಶಿವಲಿಂಗ ದೇವಸ್ಥಾನವಿದ್ದು, ಇದರಲ್ಲಿ ಒಂದು ಉಯ್ಯಾಲೆ ಮಂಟಪ, ಮುಂದೆ ಗೋಪುರ ಮತ್ತು ಹೆಬ್ಬಾಗಿಲು ಇರುತ್ತದೆ. |
| | | | | | | ಪಶ್ಚಿಮ: | ದೇವಸ್ಥಾನದ ಜಾಗ | | |
| | | | | | | ಉತ್ತರ: | ದೇವಸ್ಥಾನಕ್ಕೆ ಹೋಗುವ ರಸ್ತೆ | | |
| | | | | | | ದಕ್ಷಿಣ: | ದೇವಸ್ಥಾನದ ಜಾಗ | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

**PR--32**
**SC-50**

## PLANT-TECH RESOURCES (INDIA) LIMITED

**Plot 245, Baikampady Industrial Area New Mangalore 575011**

**U11202KA2006PLC040462**

Notice is hereby given that, pursuant to section 485 of the Companies Act, 1956, the Company in terms of section 484 (1) (b) of the Companies Act, 1956, passed a Special Resolution at the Extraordinary General Meeting held on 30.12.2014 to wind up the Company by members voluntary winding up.

That the Company has appointed Mr. Chethan Nayak K. Practicing Company Secretary, Mangaluru as Liquidator of the Company for the purpose of such winding up as per the provisions of the Companies Act, 1956.

Plant-Tech Resources (India) Ltd. (In Liquidation)
**CS CHETHAN NAYAK K**
LIQUIDATOR

**FORM NO. 151**

[See Rule 315]

Member's (or Creditor's) Voluntary Winding-up

Notice of appointment of liquidator pursuant to Section 516

| | |
|---|---|
| **Name of Company:** | Plant-Tech Resources ( India )Limited |
| **Nature of business:** | To carry on the business of joint venture company in Middle East or any other part of the world as agreed by the promoters from time to time to carry out business of providing specialized maintenance and other services such as catalyst handling, and commissioning services including providing skilled human resources and technical know-how to the Oil & Gas upstream and downstream sector, (petro) chemicals, fertilizers, Iron & Steel and Power Plants. etc amongst others |
| **Address of registered Office:** | Plot 245, Baikampady Industrial Area New Mangalore-575 011 |
| **Name and address of the Liquidator:** | CS Chethan Nayak K Practicing Company Secretary Yenepoya Mall Kadri Road Mangaluru-03 |
| **Date of appointment:** | 30.12.2014 |
| **By whom appointed:** | The Shareholders of the Company by Special Resolution dated 30.12.2014 |

Plant-Tech Resources (India) Ltd. (In Liquidation)

**CS CHETHAN NAYAK K**

LIQUIDATOR

**PD. 127**
**SC. 05**

## B. T. ANANTHARAJ ENTERPRISES PRIVATE LIMITED

**718/1, Subash Road, Post box no. 7, Davangere 577 001**

**CIN No. U05190KA2004PTC034792**

Notice is hereby given that, pursuant to section 485 of the Companies Act, 1956, the Company in terms of section 484 (1) (b) of the Companies Act, 1956, passed a Special Resolution at the Annual General Meeting held on 10.01.2015 to wind up the Company by members voluntary winding up.

That the Company has appointed Mr. Saji P. John, Advocate, Bangalore as Liquidator of the Company for the purpose of such winding up as per the provisions of the Companies Act, 1956.

B.T. ANANTHARAJ ENTERPRISES
PRIVATE LIMITED (IN LIQUIDATION)

**SAJI P JOHN**

LIQUIDATOR

**FORM NO. 151**

[See Rule 315]

Member's (or Creditor's) Voluntary Winding-up

Notice of appointment of liquidator pursuant to Section 516

| | |
|---|---|
| **Name of Company:** | B. T. Anantharaj Enterprises Private Limited |
| **Nature of business:** | To carry on the business of decorticating and de-husking all kinds of food grins, and carrying on the business of wholesalers, retailers, dealers, stockiest and distributors of all kinds of food grains and its by products |
| **Address of registered Office:** | 718/1, Subash Road, Post box no. 7, Davangere 577 001 |
| **Name and address of the Liquidator:** | Mr. Saji P.John, Advocate, No. 463, 13th Cross, 10th Main, Wilson Garden, Bangalore-560 027 |
| **Date of appointment:** | 10.01.2015 |
| **By whom appointed:** | The Shareholders of the Company by Special Resolution dated 10.01.2015 |

B.T. ANANTHARAJ ENTERPRISES
PRIVATE LIMITED (IN LIQUIDATION)

**SAJI P JOHN**

LIQUIDATOR

**PD. 128**
**SC. 05**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ.ಇವರ ಕಾರ್ಯಾಲಯ.**

ವಿಷಯ: ಸ್ಥಗಿತಗೊಂಡಿರುವ **ಹರಿಹರೇಶ್ವರ ಕೃಷಿ ಉತ್ಪನ್ನಗಳ ಸಂಸ್ಕರಣ ಸಹಕಾರ ಸಂಘ ನಿ, ಬನ್ನಿಕೋಡು, ಹರಿಹರ-ತಾ, ದಾವಣಗೆರೆ-ಜಿಲ್ಲೆ,** ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72ರನ್ವಯ ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ: 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವೆ ಸಂಖ್ಯೆ:ಎಆರ್-31/ಸಮಾಪನೆ/ಹರಿಹರೇಶ್ವರ/**ಸಿಆರ್-01** /2013-14 ದಿ:10-05-2013.

2) ದಿನಾಂಕ:15-09-2014 ರಂದು ನಡೆದ ದಾವಣಗೆರೆ ಜಿಲ್ಲಾಮಟ್ಟದ ಸಹಕಾರ ಇಲಾಖೆ ಮತ್ತು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ಸಮನ್ವಯ ಸಮಿತಿ ಸಭೆಯ ನಡವಳಿಗಳು.

3) ' ವಿಜಯ ಕರ್ನಾಟಕ' ದಿನಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ** : -ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರ **ದಿ:10-05-2013ರ** ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವೆ ಪ್ರಕಾರ ವಿಷಯ ಸೂಚಿತ ಸಂಘವು ನೋಂದಣಿ ಸಂಖ್ಯೆ: **ಎಆರ್-31/ಆರ್‌ಜಿಎನ್/27088/99-2000 ದಿ:04-01-2000**ರಲ್ಲಿ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ **05** ವರ್ಷದಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಸಂಘವು **2003-04ನೇ** ಸಾಲಿನಿಂದ ಸಂಘದ ಲೆಕ್ಕಪರಿಶೋಧನೆ ಆಗಿರುವುದಿಲ್ಲ, ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ 53ರನ್ವಯ ಅಗತ್ಯ ಮಾಹಿತಿಗಳನ್ನು ಇಲಾಖಾಧಿಕಾರಿಗಳಿಗೆ ಸಲ್ಲಿಸುತ್ತಿರುವುದಿಲ್ಲವೆಂದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಕುರಿತು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (3)ರ ರೀತ್ಯಾ **ಪತ್ರಿಕಾ ಪ್ರಕಟಣೆ ಮೂಲಕ ತಿಳುವಳಿಕೆ** ನೀಡಿದರೂ ಸಹ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್/ಡಿವಿಜಿ/ಸ್ಥಗಿತ/ಸಿಆರ್-03/2013-14, ದಿನಾಂಕ: 13-10-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಸಿ ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17-02-2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎನ್. ಸುರೇಶ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಹರಿಹರೇಶ್ವರ ಕೃಷಿ ಉತ್ಪನ್ನಗಳ ಸಂಸ್ಕರಣ ಸಹಕಾರ ಸಂಘ ನಿ, ಬನ್ನಿಕೋಡು, ಹರಿಹರ-ತಾ, ದಾವಣಗೆರೆ-ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ**ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ,** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ-ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ **ದಿನಾಂಕ:13-10-2014** ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**PR. 26** **ಎನ್. ಸುರೇಶ್**

**SC. 30** ಸಹಕಾರ ಸಂಘಗಳ ಉಪನಿಬಂಧಕರು. ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ.ಇವರ ಕಾರ್ಯಾಲಯ.**

ವಿಷಯ: ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ದೊಡ್ಡೇರಿಕಟ್ಟೆ, ಚನ್ನಗಿರಿ-ತಾ, ದಾವಣಗೆರೆ-ಜಿಲ್ಲೆ,** ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ: 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ. ಇವರ ಪ್ರಸ್ತಾವೆ ಸಂಖ್ಯೆ:ಸನಿ-31/ಸಮಾಪನೆ/ಹಾಉಸಸಂನಿ/**ಸಿಆರ್-30** /2014-15 ದಿ:21-06-2014.

2) ಈ ಕಚೇರಿ ಕಾರಣ ಕೇಳಿ ನೋಟೀಸ್ ದಿ:18-08-2014.

2) ದಿನಾಂಕ:15-09-2014 ರಂದು ನಡೆದ ದಾವಣಗೆರೆ ಜಿಲ್ಲಾಮಟ್ಟದ ಸಹಕಾರ ಇಲಾಖೆ ಮತ್ತು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ಸಮನ್ವಯ ಸಮಿತಿ ಸಭೆಯ ನಡವಳಿಗಳು.

3) ದಿ:14-09-2014 ರಂದು ' ವಿಜಯ ಕರ್ನಾಟಕ' ದಿನಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ**: ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರ **ದಿ:21-06-2014ರ** ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವೆ ಪ್ರಕಾರ ವಿಷಯ ಸೂಚಿತ ಸಂಘವು ನೋಂದಣಿ ಸಂಖ್ಯೆ:**ಎಆರ್-31/ಆರ್‌ಜಿಎನ್/40874/2010-11 ದಿ:02-031-2011**ರಲ್ಲಿ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ **02** ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ

ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. **2011-12ನೇ** ಸಾಲಿನಿಂದ ಸಂಘದ ಲೆಕ್ಕಪರಿಶೋಧನೆ ಆಗಿರುವುದಿಲ್ಲ, ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ 53ರನ್ವಯ ಅಗತ್ಯ ಮಾಹಿತಿಗಳನ್ನು ಇಲಾಖಾಧಿಕಾರಿಗಳಿಗೆ ಸಲ್ಲಿಸುತ್ತಿರುವುದಿಲ್ಲವೆಂದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಕುರಿತು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (3)ರ ರೀತ್ಯಾ **ಪತ್ರಿಕಾ ಪ್ರಕಟಣೆ ಮೂಲಕ ತಿಳುವಳಿಕೆ** ನೀಡಿದರೂ ಸಹ ಯಾರಿಂದಲೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ, ಈ ಹಿನ್ನೆಲೆಯಲ್ಲಿ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್/ಡಿವಿಜಿ/ಸ್ಥಗಿತ/ಸಿಆರ್-08/2014-15, ದಿನಾಂಕ;13-10-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್ಎಂ:2010. ದಿನಾಂಕ:17-02-2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎನ್. ಸುರೇಶ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ, ದೊಡ್ಡೇರಿಕಟ್ಟೆ, ಚನ್ನಗಿರಿ-ತಾ, ದಾವಣಗೆರೆ-ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ,ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ**. ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ-ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ **ದಿನಾಂಕ:13-10-2014** ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**PR. 27** **ಎನ್. ಸುರೇಶ್**

**SC. 30** ಸಹಕಾರ ಸಂಘಗಳ ಉಪನಿಬಂಧಕರು. ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ.ಇವರ ಕಾರ್ಯಾಲಯ.

**ವಿಷಯ:** ಸಮಾಪನೆಗೊಂಡಿರುವ **ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸಲಗನಹಳ್ಳಿ, ಹರಿಹರ-ತಾ, ದಾವಣಗೆರೆ-ಜಿಲ್ಲೆ:** ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಮ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್-02/2013-14 ದಿ: 26-10-2013.
2. ಸಂಘದ ಸದಸ್ಯರ ಮನವಿ ಪತ್ರ ದಿ: 25-11-2014.
3. ಸಂಘದ ಸಮಾಪಕರು, ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ, ಇವರ ಪತ್ರ ದಿ: 27-11-2014.
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪತ್ರ ದಿ: 09-12-2014.

**ಪ್ರಸ್ತಾವನೆ**: ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರನ್ನು ಸಮಾಪಕರನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪಕರು ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸುವ ಪೂರ್ವದಲ್ಲಿ, ಸಂಘದ ಸದಸ್ಯರು ದಿ: 25-11-2014ರಂದು ಸಭೆ ಸೇರಿ ಸಂಘವನ್ನು ಪುನ:ಶ್ಚೇತನಗೊಳಿಸಕೊಂಡು ಕಾರ್ಯನಿರ್ವಹಿಸಲು ತೀರ್ಮಾನಿಸಿ ಕೋರಿರುತ್ತಾರೆ. ಇದೇ ಅಂಶವನ್ನು ಸಂಘದ ಸಮಾಪಕರು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರು, ಉಲ್ಲೇಖ 03 ರ ಪತ್ರದಲ್ಲಿ ಸಂಘವನ್ನು ಪುನ:ಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಸಂಘವನ್ನು ಪುನ:ಶ್ಚೇತಗೊಳಿಸಲು ಉಲ್ಲೇಖ (4)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಶಿಫಾರಸ್ಸು ಮಾಡಿರುತ್ತಾರೆ. ಸಂಘದ ಸದಸ್ಯರು ಕ್ರಿಯಾ ಯೋಜನೆ ಹಾಕಿಕೊಂಡು, ಕ್ರಿಯಾ ಯೋಜನೆ ಪ್ರಕಾರ ಪ್ರತಿ ಆರು ತಿಂಗಳಿಗೊಮ್ಮೆ ಗುರಿ ಸಾಧನೆಯ ಪ್ರಗತಿ ತ:ಖ್ತೆಯನ್ನು ಈ ಕಛೇರಿಗೂ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಗೂ ಸಲ್ಲಿಸುವಂತೆ ಸೂಚಿಸುತ್ತಾ ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಪುನ:ಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್-02/2013-14 ದಿನಾಂಕ: 12-12-2014**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ: 139:ಸಿಎಲ್ಎಂ:2010, ದಿನಾಂಕ: 17-02-2011ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎನ್. ಸುರೇಶ್, ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸಲಗನಗಳ್ಳಿ, ಹರಿಹರ-ತಾ, ದಾವಣಗೆರೆ-ಜಿಲ್ಲೆ: ಇದರ ಉಲ್ಲೇಖ (1)ರ ಸಮಾಪನೆ ಆದೇಶವನ್ನು ರದ್ದುಗೊಳಿಸಿ, ಈ ಸಂಘವನ್ನು ಮುಂದುವರಿಸಿ ಕೊಂಡು ಹೋಗಲು ಅವಕಾಶ ನೀಡುತ್ತಾ ಈ ಮೂಲಕ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಪುನ:ಶ್ಚೇತನಕ್ಕಾಗಿ ಆದೇಶಿಸಿರುತ್ತಾರೆ.

**ಷರತ್ತುಗಳು:**

1. ಪುನ:ಶ್ಚೇತನಗೊಂಡ 6 ತಿಂಗಳ ಒಳಗಾಗಿ ಲೆಕ್ಕಪರಿಶೋಧನೆಮಾಡಿಸಿ ಸದರಿ ವರದಿಯನ್ನು ಈ ಕಛೇರಿಗೆ ಸಲ್ಲಿಸುವುದು.
2. ಕ್ರಿಯಾ ಯೋಜನೆ ಹಾಕಿಕೊಂಡು ಅದರ ರೀತ್ಯಾ ಕಾರ್ಯಕ್ರಮ ಹಮ್ಮಿಕೊಂಡು ಪ್ರಗತಿ ಸಾಧಿಸುವುದು.
3. ಡಿ.ಡಿ.ಸಿ.ಸಿ. ಬ್ಯಾಂಕ್‌ನೊಂದಿಗೆ ವ್ಯವಹಾರ ಮಾಡತಕ್ಕದ್ದು.

ಒಂದು ವೇಳೆ ಷರತ್ತಿಗನುಗುಣವಾಗಿ 6 ತಿಂಗಳ ನಂತರ ಯಾವುದೇ ಪ್ರಗತಿ ಸಾಧಿಸದಿದ್ದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸಲಾಗುವುದು. ಸಂಘದ ಸಮಾಪಕರು, ಸಹಕಾರ ಚುನಾವಣಾ ಆಯೋಗದಿಂದ ಆಡಳಿತ ಮಂಡಳಿ ರಚನೆಗೆ ಚುನಾವಣಾಧಿಕಾರಿ ನೇಮಿಸಿ, ನೂತನ ಆಡಳಿತ ಮಂಡಳಿ ರಚನೆಯಾಗುವವರೆಗೂ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿದ್ದು ವ್ಯವಹಾರ ನಿರ್ವಹಿಸುವುದು.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿ: 12–12–2014.

**PR. 25** ಎಸ್. ಸುರೇಶ್

**SC. 30** ಸಹಕಾರ ಸಂಘಗಳ ಉಪನಿಬಂಧಕರು. ದಾವಣಗೆರೆ ಜಿಲ್ಲೆ, ದಾವಣಗೆರೆ.

## ಜಂಟಿ ನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ನಂ 167, 11 ನೇ ಮೇನ್ ಸರಸ್ವತಿಪುರಂ, ಮೈಸೂರು

### ಅಧಿಸೂಚನೆ

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ–8ಎ/2014–15, ದಿನಾಂಕ: 18–11–2014**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಕಟ್ಟಡ ಕಲ್ಲಿನ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಹಿರಿಯ ಭೂವಿಜ್ಞಾನಿ (ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿಕ್ಕಬಳ್ಳಾಪುರ ದೂರವಾಣಿ ಸಂಖ್ಯೆ: 08156–273325 ಇವರಿಂದ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕೃತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಹಿರಿಯ ಭೂವಿಜ್ಞಾನಿ (ಖ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿಕ್ಕಬಳ್ಳಾಪುರ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು. ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು. ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಕ್ಷೇಪಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರ ಸಂ | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎಕರೆ/ಗುಂಟೆ | ಹಳೇ ಕ.ಗ.ಗು. ಸಂಖ್ಯೆ | ಚೆಕ್ಕುಬಂದಿ |
|---|---|---|---|---|---|---|---|---|
| 1 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಕಟ್ಟಡಕಲ್ಲು | ಮುಗುಳ ಕುಪ್ಪೆ | 29 | 2–00 | 488 | ಉ:ಸ.ನಂ.29ರಭಾಗ<br>ದ: ಸ.ನಂ. 29 ರ ಭಾಗ<br>ಪೂ: ಗುವ್ವಲಕ್ಕನಹಳ್ಳಿ ಗಡಿ<br>ಪ: ಸ.ನಂ. 29 ರ ಭಾಗ |
| 2 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಕಟ್ಟಡಕಲ್ಲು | ಕುಂಟಚಿಕ್ಕನಹಳ್ಳಿ | 28 | 1–00 | 127 | ಉ: ಸ.ನಂ. 28 ರ ಭಾಗ<br>ದ: ಸ.ನಂ. 28 ರ ಭಾಗ<br>ಪೂ: ದೇವರಹಳ್ಳಿ ಗಡಿ<br>ಪ: ಸ.ನಂ. 28 ರ ಭಾಗ |
| 3 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಕಟ್ಟಡಕಲ್ಲು | ಉಪ್ಪರಹಳ್ಳಿ | 28 | 2–00 | 449 | ಉ: ಸ.ನಂ. 28 ರ ಭಾಗ<br>ದ: ಸ.ನಂ. 28 ರ ಭಾಗ<br>ಪೂ: ಸ.ನಂ. 28 ರ ಭಾಗ<br>ಪ: ಸ.ನಂ. 28 ರ ಭಾಗ |
| 4 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಕಟ್ಟಡಕಲ್ಲು | ಉಪ್ಪರಹಳ್ಳಿ | 28 | 2–00 | 450 | ಉ: ಸ.ನಂ. 28 ರ ಭಾಗ<br>ದ: ಸ.ನಂ. 28 ರ ಭಾಗ<br>ಪೂ: ಸ.ನಂ. 28 ರ ಭಾಗ<br>ಪ: ಸ.ನಂ. 28 ರ ಭಾಗ |
| 5 | ಚಿಕ್ಕಬಳ್ಳಾಪುರ | ಗುಡಿಬಂಡೆ | ಕಟ್ಟಡಕಲ್ಲು | ವರ್ಲಕೊಂಡನಹಳ್ಳಿ | 8 | 3–00 | 570 | ಉ: ಸ.ನಂ. 7 ರ ಭಾಗ<br>ದ: ಸ.ನಂ. 8 ರ ಭಾಗ<br>ಪೂ: ಗೋಪುರದಹಳ್ಳಿ ಗಡಿ<br>ಪ: ಸ.ನಂ 8 ರ ಭಾಗ |
| 6 | ಚಿಕ್ಕಬಳ್ಳಾಪುರ | ಗುಡಿಬಂಡೆ | ಕಟ್ಟಡಕಲ್ಲು | ಶಿಂಗನಹಳ್ಳಿ ಮತ್ತು ಉಪ್ಪಕುಂಟಹಳ್ಳಿ | 45 & 5 | 3–00 | 576 | ಉ: ಸ.ನಂ. 5 ರ ಭಾಗ<br>ದ: ಸ.ನಂ. 45ರ ಭಾಗ<br>ಪೂ: ಸ.ನಂ. 5 ಮತ್ತು 45ರ ಭಾಗ<br>ಪ: ಸ.ನಂ.5 ಮತ್ತು 45ರ ಭಾಗ |

ಜಂಟಿ ನಿರ್ದೇಶಕರು

**PR. 1043** ಗಣಿ ಮತ್ತು ಭೂವಿಜ್ಞಾನ ಇಲಾಖೆ ದಕ್ಷಿಣ ವಲಯ, ಮೈಸೂರು.

## URBAN DEVELOPMENT SECRETARIAT

## NO.UDD/41 /MNJ/2014,BANGALORE, DATED: 08-01-2015.

## FINAL NOTIFICATION

Whereas the Government of Karnataka has sanctioned an improvement scheme for the "**Formation of Railway Over bridge in lieu of LC's 4 & 4B at KM 7/500-600 on Yeshwanthapura-Tumkur & Tumkur-Yelahanka bye-pass on MES Road near Jalahally for Outer Ring Road**" in Bengaluru by the Bangalore Development Authority vide Government order No. IDD 57 NSW 2009 dated: 31/05/2011.

Now, therefore in exercise of the powers conferred under Sub-Section (1) of Section 19 of the Bangalore Development Authority Act 1976 (Karnataka Act, No. 12 of 1976) the Government of Karnataka hereby declares that the lands specified in the Schedule noted below be the same a little more or less are needed for public purpose to which for the scheme- "**Formation of Railway Over bridge in lieu of LC's 4 & 4B at KM 7/500-600 on Yeshwanthapura-Tumkur & Tumkur-Yelahanka bye-pass on MES Road near Jalahally for Outer Ring Road**" in Bengaluru. "and in exercise of the powers conferred by Clause (C) of Section 3 and section 7 of Land Acquisition Act 1894 (Central Act 1 Amendment) Land Acquisition (Karnataka Extension and amendment) Act, 1961 (Karnataka Act 17 of 1961) read with Section 36 of the Bangalore Development Authority Act, 1976 the Special Land Acquisition Officer, Bangalore Development Authority, Bangalore is here by appointed to perform the duties and functions of the Deputy Commissioner (Land Acquisition) under the said Land Acquisition Act and directed to take order for the acquisition of the said lands.

The Preliminary notification for the scheme- "**Formation of Railway Over bridge in lieu of LC's 4 & 4B at KM 7/500-600 on Yeshwanthapura-Tumkur & Tumkur-Yelahanka bye-pass on MES Road near Jalahally for Outer Ring Road**" in Bengaluru. " has been published in the Karnataka Gazette dated: 29/08/2013 in Part-III at pages 3358 to 3359 vide Notification No. **BDA/Commr/DC (LA)/SLAO/A2/PR/154/2012-13, Dated:26/07/2013.**

The plans of the said lands is kept in the office of the Special Land Acquisition Officer, Bangalore Development Authority, T-Chowdaiah road, Bangalore-560020 for information of the general public.

**SCHEDULE**

| | VILLAGE : JALAHALLI | | | | | HOBLI : YESHWANTHAPURA | | | | | | | | TALUK : BANGALORE NORTH | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| Sl. No. | Name of the Kathedars/Anubhavadars.Smts/ Sriyuths | Sy. No. | Hissa No | Total Extent | | KHARAB: A - Kharab | | B - Kharab | | Total Kharab | | Remaining Extent | | Whether W/D/G | Assesment | Extent Acquired | | Bounded by | | | |
| | | | | A | G | A | G | A | G | A | G | A | G | | Rs.Ps | A | G | East | West | North | South |
| 1 | 2 | 3 | 4 | 5 | | 6 | | | | | | 7 | | 8 | 9 | 10 | | 11 | 12 | 13 | 14 |
| 1 | Khathadars: Mula Venkatamma & 4 others (Converted land) | 30 | 1 | 3 | 14 | 3 | 14 | 0 | 0 | 3 | 14 | 0 | 0 | ALN | 0.0 | 0 | 3 | 30/1 | 42/1A | Goraguntepalya to Hebbal ORR | 30/1 |
| 2 | Anubhavadars: Venkateshwara motars | 41 | 7 | 0 | 35 | 0 | 0 | 0 | 5 | 0 | 5 | 0 | 30 | Dry | 0.79 | 0 | 1.5 | 42/1A | 41/7 | Goraguntepalya to Hebbal ORR | 41/7 |

| | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| 3 | Khathadars: Shivanna s/o Siddappa<br>Anubhavadars: J.S.Shivashankar s/o S.Shivanna and<br>S.Siddappaswamy s/o S.Shivanna<br>Khathadars: Narayana J S, Bhagyamma<br>Anubhavadars:<br>Smt. J.N. Padmavathi w/o Ramesh<br>Smt Lalitha Krishnamurthy w/o late J.N. Krishnamurthy,<br>J.N. Chandra murthy s/o late J.S. Narayana, J.N. Srinivasamurthy s/o late J.S. Narayana, Smt. J.N. Manjula w/o Rajanna, Smt. J.N. Prabhavathi w/o Munegowda K, Smt. Lakshmi devi J.N w/o Radhakrishna | 42 | 1A | 0 | 20 | 0 | 1 | 0 | 0 | 0 | 1 | 0 | 19 | Dry | 0.66 | 0 | 7.25 | 30/1 | 41/7 | Goraguntepalya to Hebbal ORR | 42/1A |
| **Total** | | | | | | | | | | | | | | | | **0** | **11.75G** | | | | |

By Order and In the name of the Governor of Karnataka

**N.Narasimha Murthy**

Under Secretary to Government,,

Urban Development Department

**PR. 228**
**SC. 200**

